KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಆಗಸ್ಟ್ ೫, ೨೦೧೦ (ಶ್ರಾವಣ ೧೪ ಶಕ ವರ್ಷ ೧೯೩೨) | ಸಂಚಿಕೆ ೩೧ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**

**ಸಂಖ್ಯೆ: ಸಿಬ್ಬಂದಿ.ಶಿಸ್ತು.ಟ್ರ್ಯಾಪ್.15/2001–02, ದಿನಾಂಕ:29ನೇ ಜೂನ್, 2010**

**ವಿಷಯ:** ಶ್ರೀ ಕೆ. ಶಿವಣ್ಣ, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಹೆಚ್.ಡಿ. ಕೋಟೆ ಇವರ ವಿರುದ್ಧದ ಟ್ರ್ಯಾಪ್ ಪ್ರಕರಣ– ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–47/ಸಿಆರ್–5/2001 ಎಂಡಿಕೆ ದಿನಾಂಕ:25.05.2010.

2) ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಂಗ್, ಕರ್ನಾಟಕ ಲೋಕಾಯುಕ್ತ, ಮಡಿಕೇರಿ ಇವರ ಫ್ಯಾಕ್ಸ್ ಸಂದೇಶ ದಿನಾಂಕ:02.08.2001.

3) ಅಮಾನತ್ತುಗೊಳಿಸಿರುವ ಈ ಕಛೇರಿಯ ಸಮಸಂಖ್ಯೆ ನಡೆವಳಿ ದಿನಾಂಕ:18.08.2001 ಮತ್ತು 04.05.2002.

4) ಅಭಿಯೋಜನಾ ಮಂಜೂರಾತಿಯನ್ನು ನೀಡಿರುವ ಭೂ.ಜಂ.ನಿ., ಮೈಸೂರು ಇವರ ನಡೆವಳಿ ಸಂಖ್ಯೆ:ಸಿಬ್ಬಂದಿ.ಶಿಸ್ತು.ಟ್ರ್ಯಾಪ್.2/2002–03, ದಿನಾಂಕ:03.05.2002.

5) ಕೊಡಗು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ನಂ.3/2002 ದಿನಾಂಕ:22.04.2010ರ ಆದೇಶ.

6) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95, ಬೆಂಗಳೂರು ದಿನಾಂಕ:26.06.1996.

**ಪ್ರಸ್ತಾವನೆ:**

ಶ್ರೀ ಶಿವಣ್ಣ, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಹೆಚ್.ಡಿ. ಕೋಟೆ ಇವರು ಈ ಹಿಂದೆ ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಮಡಿಕೇರಿ ವ್ಯಾಪ್ತಿಯ ತಾಲ್ಲೂಕು ಭೂಮಾಪನ ಕಛೇರಿ, ಸೋಮವಾರಪೇಟೆ ಕಛೇರಿಯಲ್ಲಿ ದ್ವಿತೀಯ ದರ್ಜೆ ಭೂಮಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಪಿರ್ಯಾದಿಯಾದ ಶ್ರೀ ಕೆ.ಎಂ. ಚಂಗಪ್ಪ ಅಂಡಗೋವಿ ಗ್ರಾಮ, ಸಂತೇಕೊಪ್ಪ ಹೋಬಳಿ, ಸೋಮವಾರಪೇಟೆ ತಾಲ್ಲೂಕು ಇವರ ಜಮೀನಿಗೆ ಸಂಬಂಧಿಸಿದ ಆಕಾರಬಂದ್ ರೆಕಾರ್ಡ್‌ನ್ನು ತಹಶೀಲ್ದಾರರಿಗೆ ಕಳುಹಿಸಲು ರೂ.500–00ಗಳ ಲಂಚದ ಹಣಕ್ಕೆ ಒತ್ತಾಯಿಸಿ, ದಿನಾಂಕ:02.08.2001 ರಂದು ರೂ.500–00ಗಳ ಲಂಚದ ಹಣವನ್ನು ಸ್ವೀಕರಿಸಿ 2ನೇ ಆರೋಪಿತ ನೌಕರರಾದ ಶ್ರೀ

ಜವರೇಗೌಡ, ಬಾಂದುಜವಾನರಿಗೆ ಕೊಟ್ಟ ಸಮಯದಲ್ಲಿ ಲೋಕಾಯುಕ್ತ ರವರು ಬೀಸಿದ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿರುವ ಬಗ್ಗೆ ಉಲ್ಲೇಖ (2)ರ ಕರ್ನಾಟಕ ಲೋಕಾಯುಕ್ತರವರ ಫ್ಯಾಕ್ಸ್ ಸಂದೇಶದ ಮೇರೆಗೆ ಈ ಕಛೇರಿ ನಡೆವಳಿ ದಿನಾಂಕ:18.08.2001ರಲ್ಲಿ ಆರೋಪಿತರಿಬ್ಬರನ್ನು ಅಮಾನತ್ತಿನಲ್ಲಿಟ್ಟಿದ್ದು, ದಿನಾಂಕ:04.05.2002ರ ನಡೆವಳಿಯಲ್ಲಿ ಟ್ರ್ಯಾಪ್ ಪ್ರಕರಣದ ಇತ್ಯರ್ಥ ಕಾಯ್ದಿರಿಸಿ ಅಮಾನತ್ತಿನಿಂದ ತೆರವುಗೊಳಿಸಿ ಶ್ರೀ ಶಿವಣ್ಣ ರವರನ್ನು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಮಂಡ್ಯ ಕಛೇರಿಗೆ ಹಾಗೂ ಶ್ರೀ ಜವರೇಗೌಡ, ಬಾಂದುಜವಾನರು ಇವರನ್ನು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಹಾಸನ ಕಛೇರಿಗೆ ಪುನರ್‌ನೇಮಕ ಮಾಡಲಾಗಿರುತ್ತದೆ. ಸದರಿ ನೌಕರರುಗಳನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ದಿನಾಂಕ:03.05.2002ರ ನಡವಳಿಯಲ್ಲಿ ಮಂಜೂರಾತಿಯನ್ನು ನೀಡಲಾಗಿರುತ್ತದೆ.

ಸದರಿ ಟ್ರ್ಯಾಪ್ ಪ್ರಕರಣ ಕುರಿತು ಕೊಡಗು ಜಿಲ್ಲಾ ಮತ್ತು ಪ್ರಧಾನ ಸತ್ಯ ನ್ಯಾಯಾಲಯದಲ್ಲಿ ವಿಚಾರಣೆ ನಡೆದು ಸ್ಪೆಷಲ್ ಕೇಸ್ (corrpn) ನಂ.3/2002, ದಿನಾಂಕ:22.04.2010ರ ತೀರ್ಪಿನಲ್ಲಿ ಆಪಾದಿತ–2 ರವರಾದ ಶ್ರೀ ಜವರೇಗೌಡ, ಬಾಂದುಜವಾನ ಇವರನ್ನು ಆಪಾದನೆಗಳಿಂದ ದೋಷಮುಕ್ತಗೊಳಿಸಿರುತ್ತಾರೆ. ಆಪಾದಿತ–1 ರವರಾದ ಶ್ರೀ ಕೆ. ಶಿವಣ್ಣ ಇವರ ವಿರುದ್ಧದ ಆರೋಪವು ಸಾಬೀತಾಗಿ ಕಲಂ–7, ಲಂಚ ನಿರೋಧಕ ಕಾಯಿದೆ 1988ರ ಅಡಿಯಲ್ಲಿ ಎಸಗಿರುವ ಅಪರಾದಕ್ಕೆ 1 ವರ್ಷ ಸಾದಾ ಶಿಕ್ಷೆ ಮತ್ತು ರೂ.2.000–00 ದಂಡ ಮತ್ತು ಕಲಂ 13 (i) (ಡಿ) ಸಹವಾಚನ 13(2) ಲಂಚ ನಿರೋಧಕ ಕಾಯಿದೆ 1988 ರಡಿಯಲ್ಲಿ ಎಸಗಿರುವ ಅಪರಾಧಕ್ಕೆ 2 ವರ್ಷ ಸಾದಾಶಿಕ್ಷೆ ಮತ್ತು ರೂ.3.000–00 ದಂಡ ವಿಧಿಸಿರುವ ಕಾರಣ ಸದರಿ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಜರುಗಿಸಲು ಕರ್ನಾಟಕ ಲೋಕಾಯುಕ್ತರವರು ಉಲ್ಲೇಖ (i)ರ ಪತ್ರದಲ್ಲಿ ಕೋರಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 9. ಸೇಇವಿ.95 ಬೆಂಗಳೂರು ದಿನಾಂಕ:26.06.1996 ಮತ್ತು ಸರ್ವೋಚ್ಚ ನ್ಯಾಯಾಲಯದ ಪ್ರಕರಣ ಸಂಖ್ಯೆ:770/2001 ದಿನಾಂಕ:02.08.2001ರನ್ವಯ, ನ್ಯಾಯಾಲಯವು ನೌಕರರಿಗೆ ಶಿಕ್ಷೆ ವಿಧಿಸಿ, ತೀರ್ಪು ನೀಡಿದ್ದಲ್ಲಿ ಸಂವಿಧಾನದ ಅನುಚ್ಛೇದ 311 (2) ರಡಿಯಲ್ಲಿನ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ಸರ್ಕಾರಿ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 14(i)ರನ್ವಯ, ಕ್ರಿಮಿನಲ್ ಆರೋಪವು ನ್ಯಾಯಾಲಯದಲ್ಲಿ ಸಾಬೀತಾದಂತಹ ಸರ್ಕಾರಿ ನೌಕರರನ್ನು ಸೇವೆಯಿಂದ ವಜಾ ಮಾಡುವ ಅಥವಾ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ ಎಂದೂ, ಒಂದು ವೇಳೆ ಮೇಲ್ಮನವಿಯಲ್ಲಿ ಆಪಾದಿತರು ಖುಲಾಸೆಯಾದಲ್ಲಿ, ಅವರನ್ನು ಸೇವೆಯಲ್ಲಿ ಪುನರ್‌ನೇಮಕಗೊಳಿಸಿ, ವಜಾಗೊಳಿಸದಿದ್ದಲ್ಲಿ ಲಭ್ಯವಾಗುತ್ತಿದ್ದ ಎಲ್ಲಾ ಸೇವಾ ಭತ್ಯೆಗಳಿಗೆ ಅರ್ಹರಾಗಿರುತ್ತಾರೆಂಬ ಸರ್ಕಾರದ ಸುತ್ತೋಲೆಯನ್ನು ಪರಿಗಣಿಸಿ, ಸದರಿ ನೌಕರರನ್ನು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಜಿ. ಕಲ್ಪನಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಕೊಡಗು ಜಿಲ್ಲಾ ಮತ್ತು ಪ್ರಧಾನ ಸತ್ರ ನ್ಯಾಯಾಲಯದ ತೀರ್ಪು ಸ್ಪೆಷಲ್ ಕೇಸ್ ನಂ.3/2002 ದಿನಾಂಕ:22.04.2010 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95 ಬೆಂಗಳೂರು ದಿನಾಂಕ:26.06.1996ರನ್ವಯ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 9(3) ರೊಂದಿಗೆ ಓದಿಕೊಂಡ ನಿಯಮ 8(viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ಶಿವಣ್ಣ, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಹೆಗ್ಗಡದೇವನಕೋಟೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

ಪಿ.ಆರ್.1031

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**
**ಸಂಖ್ಯೆ: ಸಿಬ್ಬಂದಿ.ಶಿಸ್ತು.ಟ್ರ್ಯಾಪ್.1/2003–04, ದಿನಾಂಕ:29ನೇ ಜೂನ್, 2010**

**ವಿಷಯ:** ಶ್ರೀ ರಿಯಾಜ್ ಅಹಮದ್, ದ್ವಿತೀಯ ದರ್ಜೆ ಭೂಮಾಪಕರು, ನಗರಮಾಪನ ಯೋಜನಾಧಿಕಾರಿಗಳ ಕಛೇರಿ, ಮೈಸೂರು ಇವರ ವಿರುದ್ಧದ ಟ್ರ್ಯಾಪ್ ಪ್ರಕರಣ– ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1) ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್.ಐಎನ್‌ವಿ(ಜಿ)/ಎಂ–4/ಸಿಆರ್–2/2003 ಮೈಸೂರು, ದಿನಾಂಕ:09.04.2003

2) ಭೂ.ಜಂ.ನಿ. ಮೈಸೂರು ಇವರ ನಡೆವಳಿ ಸಂಖ್ಯೆ: ಸಿಬ್ಬಂದಿ ಶಿಸ್ತು.ಟ್ರ್ಯಾಪ್.3/2003–04 ದಿನಾಂಕ:02.05.2003, 12.01.2004.

3) ಅಭಿಯೋಜನಾ ಮಂಜೂರಾತಿಯನ್ನು ನೀಡಿರುವ ಭೂ.ಜಂ.ನಿ., ಮೈಸೂರು ಇವರ ಆದೇಶ ಸಂಖ್ಯೆ:ಸಿಬ್ಬಂದಿ.ಶಿಸ್ತು.ಟ್ರ್ಯಾಪ್.3/2003–04, ದಿನಾಂಕ:08.12.2003.

4) ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಕಂ.ಇ.122.ಭೂದಾಸೇ (3) 2006 ಬೆಂಗಳೂರು ದಿನಾಂಕ:22.05.2006 ಮತ್ತು 31.03.2009.

5) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್ ಐಎನ್‌ವಿ(ಜಿ)/ಎಂ–4/ಸಿಆರ್–2/2003 ಎಂವೈಎಸ್ ದಿನಾಂಕ:12.05.2010.

6) ಮೈಸೂರು ಜಿಲ್ಲಾ ಮತ್ತು ಪ್ರಧಾನ ಸತ್ರ ನ್ಯಾಯಾಲಯ ಇವರ ತೀರ್ಪು ಸ್ಪೆಷಲ್ ಕೇಸ್ ನಂ.11/2004 ದಿನಾಂಕ:08.02.2010.

7) ಮಾನ್ಯ ಉಚ್ಛ ನ್ಯಾಯಾಲಯದ ಆದೇಶ ಸಂಖ್ಯೆ: ಸಿಆರ್ ಎಲ್.ಎಪಿಎಲ್.ನಂ.190/2010 ದಿನಾಂಕ;22.02.2010.

8) ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95 ದಿನಾಂಕ:26.06.1996.

**ಪ್ರಸ್ತಾವನೆ:**

ಶ್ರೀ ರಿಯಾಜ್ ಅಹಮದ್, ದ್ವಿತೀಯ ದರ್ಜೆ ಭೂಮಾಪಕರು, ನಗರಮಾಪನ ಯೋಜನಾಧಿಕಾರಿಗಳ ಕಛೇರಿ, ಮೈಸೂರು ಇವರು ಈ ಹಿಂದೆ ತಹಶೀಲ್ದಾರ್ ಪಿರಿಯಾಪಟ್ಟಣ ಕಛೇರಿಯಲ್ಲಿ ದ್ವಿತೀಯ ದರ್ಜೆ ಭೂಮಾಪಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಪಿರ್ಯಾದಿಯಾದ ಶ್ರೀ ಚಾರ್ಲಿ ಥಾಮಸ್ ಬಿನ್ ಎ.ಎಲ್. ಥಾಮಸ್, ದೊಡ್ಡ ಕಮರಹಳ್ಳಿ ಗ್ರಾಮ, ಹಾರನಹಳ್ಳಿ ಹೋಬಳಿ, ಪಿರಿಯಾಪಟ್ಟಣ ತಾಲ್ಲೂಕು ಇವರ ಶಾನುಭೋಗನ ಹಳ್ಳಿಯಲ್ಲಿನ ಸ.ನಂ.41, 42/3, 43/2 ಮತ್ತು 40/1ರ ಹದ್ದುಬಸ್ತು ಅಳತೆ ಮಾಡುವ ಬಗ್ಗೆ ರೂ.2,000–00ಗಳ ಲಂಚದ ಹಣಕ್ಕೆ ಒತ್ತಾಯಿಸಿ, ದಿನಾಂಕ:03.03.2003ರಂದು ರೂ.500–00ಗಳ ಲಂಚದ ಹಣವನ್ನು ಸ್ವೀಕರಿಸಿ, ಲೋಕಾಯುಕ್ತ ರವರು ಬೀಸಿದ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿರುವ ಬಗ್ಗೆ ಉಲ್ಲೇಖ (1)ರ ಕರ್ನಾಟಕ ಲೋಕಾಯುಕ್ತರವರ ಪತ್ರದನ್ವಯ ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ರವರು ದಿನಾಂಕ:02.05.2003ರಂದು ಅಮಾನತ್ತಿನಲ್ಲಿಟ್ಟಿದ್ದು, ದಿನಾಂಕ:12.01.2004ರ ನಡೆವಳಿಯಲ್ಲಿ, ಟ್ರ್ಯಾಪ್ ಪ್ರಕರಣ ಇತ್ಯರ್ಥ ಕಾಯ್ದಿರಿಸಿ, ಅಮಾನತ್ತಿನಿಂದ ತೆರವುಗೊಳಿಸಿ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ಪಾಂಡವಪುರ ಕಛೇರಿಗೆ ಪುನರ್‌ನೇಮಕ ಮಾಡಲಾಗಿರುತ್ತದೆ. ಭೂದಾಖಲೆಗಳ ಜಂಟಿ ನಿರ್ದೇಶಕರು, ಮೈಸೂರು ಇವರ ನಡೆವಳಿ ದಿನಾಂಕ:08.12.2003ರಲ್ಲಿ ನೌಕರರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡಲಾಗಿರುತ್ತದೆ.

ಸದರಿ ಟ್ರ್ಯಾಪ್ ಪ್ರಕರಣ ಕುರಿತು, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14(ಎ) ರನ್ವಯ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಪ್ರಕರಣವನ್ನು ಉಪ ಲೋಕಾಯುಕ್ತರವರಿಗೆ ವಹಿಸಿದ್ದು, ಉಪ ಲೋಕಾಯುಕ್ತರವರ ವರದಿಯ ಮೇರೆಗೆ ಸರ್ಕಾರದ ಆದೇಶ ದಿನಾಂಕ:31.03.2009ರಲ್ಲಿ ನೌಕರರನ್ನು ಆರೋಪಮುಕ್ತಗೊಳಿಸಿ ಆದೇಶಿಸಿರುತ್ತದೆ.

ಸದರಿ ಟ್ರ್ಯಾಪ್ ಪ್ರಕರಣ ಕುರಿತು ಜಿಲ್ಲಾ ಮತ್ತು ಪ್ರಧಾನ ಸತ್ರ ನ್ಯಾಯಾಲಯ, ಮೈಸೂರಿನಲ್ಲಿ ವಿಚಾರಣೆ ನಡೆಯುತ್ತಿದ್ದು, ಸ್ಪೆಷಲ್ ಕೇಸ್ ನಂ.11/2004 ದಿನಾಂಕ:08.02.2010ರ ತೀರ್ಪಿನಲ್ಲಿ ನೌಕರರ ವಿರುದ್ಧದ ಆರೋಪವು ಸಾಬೀತಾಗಿ ಕಲಂ 7, ಲಂಚ ನಿರೋಧಕ ಕಾಯಿದೆ 1988ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕೆ 1 ವರ್ಷ ಸಾದಾ ಶಿಕ್ಷೆ ಮತ್ತು ರೂ.5,000–00 ದಂಡ ಹಾಗೂ ಕಲಂ 13(i)(ಡಿ) ಸಹವಾಚನ 13(2) ಲಂಚ ನಿರೋಧಕ ಕಾಯಿದೆ 1988 ರಡಿಯಲ್ಲಿ ಎಸಗಿರುವ ಅಪರಾಧಕ್ಕೆ 2 ವರ್ಷ ಸಾದಾ ಶಿಕ್ಷೆ ಮತ್ತು ರೂ.5,000–00 ಗಳ ದಂಡನೆ ವಿಧಿಸಿರುವ ಕಾರಣ, ಸದರಿ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಜರುಗಿಸಲು ಕರ್ನಾಟಕ ಲೋಕಾಯುಕ್ತ ರವರು ಕೋರಿರುತ್ತಾರೆ.

ಸದರಿ ನ್ಯಾಯಾಲಯದ ತೀರ್ಪಿನ ವಿರುದ್ಧ ನೌಕರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ಸಂಖ್ಯೆ: ಸಿಆರ್‌ಎಲ್.ಎಪಿಎಲ್.ಸಂ.190/2010 ದಿನಾಂಕ:22.02.2010ರ ಆದೇಶದಲ್ಲಿ ದಂಡನೆಯನ್ನು ನಿಲಂಬನೆಗೊಳಿಸಿ, ನೌಕರರಿಗೆ ಜಾಮೀನು ನೀಡಲಾಗಿರುತ್ತದೆ.

ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95 ಬೆಂಗಳೂರು ದಿನಾಂಕ:26.06.1996 ಮತ್ತು ಸರ್ವೋಚ್ಚ ನ್ಯಾಯಾಲಯದ ಪ್ರಕರಣ ಸಂಖ್ಯೆ:770/2001 (ಎಸ್.ಎಲ್.ಪಿ. ಅಪರಾಧ ಸಂಖ್ಯೆ: 2202/2001) ದಿನಾಂಕ:02.08.2001 ರನ್ವಯ ನ್ಯಾಯಾಲಯವು ನೌಕರರಿಗೆ ಶಿಕ್ಷೆ ವಿಧಿಸಿ ತೀರ್ಪು ನೀಡಿದ್ದಲ್ಲಿ, ಸಂವಿಧಾನದ ಅನುಚ್ಛೇದ 311(2) ರಡಿಯಲ್ಲಿನ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14(i) ರನ್ವಯ, ಕ್ರಿಮಿನಲ್ ಆರೋಪವು ನ್ಯಾಯಾಲಯದಲ್ಲಿ ಸಾಬೀತಾದಂತಹ ಸರ್ಕಾರಿ ನೌಕರರನ್ನು ಸೇವೆಯಿಂದ ವಜಾ ಮಾಡುವ ಅಥವಾ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ ಎಂದೂ, ಒಂದು ವೇಳೆ ಮೇಲ್ಮನವಿಯಲ್ಲಿ ಆಪಾದಿತರು ಖುಲಾಸೆಯಾದಲ್ಲಿ ಅವರನ್ನು ಸೇವೆಯಲ್ಲಿ ಪುನರ್‌ನೇಮಕಗೊಳಿಸಿ, ವಜಾಗೊಳಿಸದಿದ್ದಲ್ಲಿ ಲಭ್ಯವಾಗುತ್ತಿದ್ದ ಎಲ್ಲಾ ಸೇವಾ ಭತ್ಯೆಗಳಿಗೆ ಅರ್ಹರಾಗಿರುತ್ತಾರೆಂಬ ಸರ್ಕಾರದ ಸುತ್ತೋಲೆಯನ್ನು ಪರಿಗಣಿಸಿ, ಸದರಿ ನೌಕರರನ್ನು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಜಿ. ಕಲ್ಪನಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಜಿಲ್ಲಾ ಮತ್ತು ಪ್ರಧಾನ ಸತ್ರ ನ್ಯಾಯಾಲಯ, ಮೈಸೂರು ಇವರ ತೀರ್ಪು ಸ್ಪೆಷಲ್ ಕೇಸ್ ನಂ.11/2004 ದಿನಾಂಕ:08.02.2010 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ.9.ಸೇಇವಿ.95 ಬೆಂಗಳೂರು ದಿನಾಂಕ:26.06.1996ರನ್ವಯ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 9(3) ರೊಂದಿಗೆ ಓದಿಕೊಂಡ ನಿಯಮ 8(viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಿಯಾಜ್ ಅಹಮದ್, ದ್ವಿತೀಯ ದರ್ಜೆ ಭೂಮಾಪಕರು, ನಗರಮಾಪನ ಯೋಜನಾಧಿಕಾರಿಗಳ ಕಛೇರಿ, ಮೈಸೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

ಪಿ.ಆರ್.1032

## ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ, ಬೆಂಗಳೂರು–22, ಇವರ ಕಛೇರಿ ನಡಾವಳಿ

**ಉಪಸ್ಥಿತರು:** ಶ್ರೀ ರುದ್ರಾ ನಾಯಕ್,
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ).

**ವಿಷಯ:** ವಾಹನ ಸಂಖ್ಯೆ: KA-04-5400 (Stage Carriage)ರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಮಾಲೀಕರ ಅರ್ಜಿ ದಿನಾಂಕ:30.07.2008.
2) ಮೋ.ವಾ.ನಿ. ರವರ ವರದಿ ದಿನಾಂಕ:26.10.2009.

**ಪ್ರಸ್ತಾವನೆ:**

ವಾಹನ ಸಂಖ್ಯೆ: KA-04-5400 (Stage Carriage)ರ ಮಾಲೀಕರಾದ ಶ್ರೀ ಎಂ. ವೆಂಕಟೇಶ್, ಬಿನ್ ಬಿ.ಪಿ. ಗಂಗಾಧರ್, ಮೆ. ವೆಂಕಟೇಶ್ವರ ಮೋಟಾರ್ ಸರ್ವೀಸ್, ರೇಸ್ ಕೋರ್ಸ್ ರೋಡ್, ಬೆಂಗಳೂರು ರವರು ದಿನಾಂಕ:30.07.2008ರಂದು ಈ ಕಛೇರಿಗೆ ಅರ್ಜಿ ಸಲ್ಲಿಸಿ, ವಾಹನವು ದುರಸ್ತಿ ಮಾಡಲಾರದ ಸ್ಥಿತಿಯಲ್ಲಿರುವುದರಿಂದ ನೋಂದಣಿಯನ್ನು ರದ್ದುಪಡಿಸಲು ಕೋರಿರುತ್ತಾರೆ. ದಿನಾಂಕ:31.07.2008 ರಿಂದ ವಾಹನವನ್ನು ಎಸ್.ಆರ್.ನಂ.11/2008–09 ರ ಅನ್ವಯ ಅಧ್ಯರ್ಪಣೆ ಮಾಡಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರೀಕ್ಷಿಸಿ, ದಿನಾಂಕ:26.10.2009 ರಂದು ವರದಿ ನೀಡಿ, ವಾಹನವು ದುರಸ್ತಿ ಮಾಡಲಾಗದ ಸ್ಥಿತಿಯಲ್ಲಿದ್ದು, ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ವಾಹನದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ದಿನಾಂಕ:31.07.2008 ರ ಅವಧಿವರೆಗೆ ವಾಹನಕ್ಕೆ ತೆರಿಗೆಯನ್ನು ಪಾವತಿಸಿರುತ್ತಾರೆ.

ಸದರಿ ವಾಹನವು 1994 ಮಾಡೆಲ್ ಆಗಿದ್ದು, 16 ವರ್ಷಗಳ ಹಳೆಯದಾಗಿದ್ದು, ರಸ್ತೆಯ ಮೇಲೆ ಸಂಚರಿಸಲು ಯೋಗ್ಯವಾಗಿರುವುದಿಲ್ಲವೆಂದು ಪರಿಗಣಿಸಿ ಮೋಟಾರು ವಾಹನ ಸಂಖ್ಯೆ:KA-04-5400 (Stage Carriage)ರ ನೋಂದಣಿಯನ್ನು ವಾಹನ ಅಧ್ಯರ್ಪಣೆಯಲ್ಲಿರುವಂತೆ ಷರತ್ತಿನೊಂದಿಗೆ ರದ್ದುಪಡಿಸಲು ಈ ಕೆಳಗಿನಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ: ಪ್ರಾ.ಸಾ.ಅ./ಬೆಂ.(ಉ)./ KA-04-5400/10-11, ದಿನಾಂಕ:25ನೇ ಜೂನ್, 2010**

ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ವಿಧಿ 55(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರುದ್ರಾನಾಯಕ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರಿ ಆದ ನಾನು, ಮೇಲ್ಕಂಡ ಕಾರಣಗಳಿಂದಾಗಿ, ಮೋಟಾರು ವಾಹನ ಸಂಖ್ಯೆ:KA-04-5400 (Stage Carriage)ರ ಮೇಲೆ ಏನಾದರೂ ತೆರಿಗೆ, ಆಡಿಟ್, ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದಲ್ಲಿ ವಾಹನದ ಮಾಲೀಕರೇ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1. | ಮೋಟಾರು ವಾಹನ ಸಂಖ್ಯೆ | KA-04-5400 (Stage Carriage) |
| 2. | ವಾಹನದ ತಯಾರಕನ ಹೆಸರು | Ashok Leyland |
| 3. | ವಾಹನದ ಮಾದರಿ | Saloon |
| 4. | ವಾಹನ ತಯಾರಿಕೆ ವರ್ಷ | 1994 |
| 5. | ಚಾಸೀಸ್ ಸಂಖ್ಯೆ | F10E 300464 |
| 6. | ಇಂಜಿನ್ ಸಂಖ್ಯೆ | F10E 182818 |
| 7. | ಅಶ್ವ ಶಕ್ತಿ | 110 HP |
| 8. | ಆಸನ ಸಾಮರ್ಥ್ಯ | 48+2 |
| 9. | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ಎಂ. ವೆಂಕಟೇಶ್, ಬಿನ್ ಬಿ.ಪಿ. ಗಂಗಾಧರ್, ಮೆ. ವೆಂಕಟೇಶ್ವರ ಮೋಟಾರ್ ಸರ್ವೀಸ್, ನಂ.9/ಎ, ರೇಸ್ ಕೋರ್ಸ್ ರೋಡ್, ಬೆಂಗಳೂರು |

**ರುದ್ರಾ ನಾಯಕ್**
ಪ್ರಾದೇಶಿಕ ಸಾರಿಗೆ ಅಧಿಕಾರಿ,
ಬೆಂಗಳೂರು (ಉತ್ತರ).

ಪಿ.ಆರ್.1098

**ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ, ಬೆಂಗಳೂರು–22, ಇವರ ಕಛೇರಿ ನಡಾವಳಿ**

**ಉಪಸ್ಥಿತರು:** ಶ್ರೀ ರುದ್ರಾ ನಾಯಕ್,
ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ).

**ವಿಷಯ:** ವಾಹನ ಸಂಖ್ಯೆ:CAA-7700 (Stage Carriage)ರ ರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1) ಮಾಲೀಕರ ಅರ್ಜಿ ದಿನಾಂಕ:30.07.2009.
2) ಮೋ.ವಾ.ನಿ. ರವರ ವರದಿ ದಿನಾಂಕ:26.10.2009.

**ಪ್ರಸ್ತಾವನೆ:**

ವಾಹನ ಸಂಖ್ಯೆ: CAA-7700 (Stage Carriage)ರ ಮಾಲೀಕರಾದ ಶ್ರೀ ಬಿ.ವಿ. ಅಶೋಕ್, ಮೆ. ವೆಂಕಟೇಶ್ವರ ಮೋಟಾರ್ ಸರ್ವೀಸ್, ರೇಸ್ ಕೋರ್ಸ್ ರೋಡ್, ಬೆಂಗಳೂರು ರವರು ದಿನಾಂಕ:30.07.2009ರಂದು ಈ ಕಛೇರಿಗೆ ಅರ್ಜಿ ಸಲ್ಲಿಸಿ, ವಾಹನವು ದುರಸ್ತಿ ಮಾಡಲಾರದ ಸ್ಥಿತಿಯಲ್ಲಿರುವುದರಿಂದ ನೋಂದಣಿಯನ್ನು ರದ್ದುಪಡಿಸಲು ಕೋರಿರುತ್ತಾರೆ. ದಿನಾಂಕ:30.07.2009 ರಿಂದ ವಾಹನವನ್ನು ಎಸ್.ಆರ್.ನಂ.06/2009–10 ರ ಅನ್ವಯ ಅಧ್ಯರ್ಪಣೆ ಮಾಡಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರೀಕ್ಷಿಸಿ, ದಿನಾಂಕ:26.10.2009 ರಂದು ವರದಿ ನೀಡಿ, ವಾಹನವು ದುರಸ್ತಿ ಮಾಡಲಾಗದ ಸ್ಥಿತಿಯಲ್ಲಿದ್ದು, ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ವಾಹನದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ದಿನಾಂಕ:31.07.2009 ರ ಅವಧಿವರೆಗೆ ವಾಹನಕ್ಕೆ ತೆರಿಗೆಯನ್ನು ಪಾವತಿಸಿರುತ್ತಾರೆ.

ಸದರಿ ವಾಹನವು 1985 ಮಾಡೆಲ್ ಆಗಿದ್ದು, 25 ವರ್ಷಗಳ ಹಳೆಯದಾಗಿದ್ದು, ರಸ್ತೆಯ ಮೇಲೆ ಸಂಚರಿಸಲು ಯೋಗ್ಯವಾಗಿರುವುದಿಲ್ಲವೆಂದು ಪರಿಗಣಿಸಿ ಮೋಟಾರು ವಾಹನ ಸಂಖ್ಯೆ: CAA-7700 (Stage Carriage)ರ ನೋಂದಣಿಯನ್ನು ವಾಹನ ಅಧ್ಯರ್ಪಣೆಯಲ್ಲಿರುವಂತೆ ಷರತ್ತಿನೊಂದಿಗೆ ರದ್ದುಪಡಿಸಲು ಈ ಕೆಳಗಿನಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ: ಪ್ರಾ.ಸಾ.ಅ./ಬೆಂ.(ಉ)./ CAA-7700/10-11, ದಿನಾಂಕ:25ನೇ ಜೂನ್, 2010**

ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ವಿಧಿ 55(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರುದ್ರಾನಾಯಕ್, ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರಿ ಆದ ನಾನು, ಮೇಲ್ಕಂಡ ಕಾರಣಗಳಿಂದಾಗಿ, ಮೋಟಾರು ವಾಹನ ಸಂಖ್ಯೆ: CAA-7700 (Stage Carriage)ರ ಮೇಲೆ ಏನಾದರೂ ತೆರಿಗೆ, ಆಡಿಟ್, ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದಲ್ಲಿ ವಾಹನದ ಮಾಲೀಕರೇ ಪಾವತಿಸಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದುಪಡಿಸಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1. | ಮೋಟಾರು ವಾಹನ ಸಂಖ್ಯೆ | CAA-7700 (Stage Carriage) |
| 2. | ವಾಹನದ ತಯಾರಕನ ಹೆಸರು | Ashok Leyland cheetha |
| 3. | ವಾಹನದ ಮಾದರಿ | Saloon |
| 4. | ವಾಹನ ತಯಾರಿಕೆ ವರ್ಷ | 1985 |
| 5. | ಚಾಸೀಸ್ ಸಂಖ್ಯೆ | ALEG 166877 |
| 6. | ಇಂಜಿನ್ ಸಂಖ್ಯೆ | ALEG 26879 |
| 7. | ಅಶ್ವ ಶಕ್ತಿ | 37.5 HP |
| 8. | ಆಸನ ಸಾಮರ್ಥ್ಯ | 48+2 |
| 9. | ಮಾಲೀಕರ ಹೆಸರು ಮತ್ತು ವಿಳಾಸ | ಶ್ರೀ ಬಿ.ವಿ. ಅಶೋಕ್, ಮೆ. ವೆಂಕಟೇಶ್ವರ ಮೋಟಾರ್ ಸರ್ವೀಸ್, ರೇಸ್ ಕೋರ್ಸ್ ರೋಡ್, ಬೆಂಗಳೂರು. |

**ರುದ್ರಾ ನಾಯಕ್**
ಪ್ರಾದೇಶಿಕ ಸಾರಿಗೆ ಅಧಿಕಾರಿ,
ಬೆಂಗಳೂರು (ಉತ್ತರ).

ಪಿ.ಆರ್.1099

**IN THE COURT OF THE HON'BLE XITH ADDL. CHIEF METROPOLITAN MAGISTRATE, MAYOHALL, BANGALORE CITY**

It is hereby notified to the public that the Banasawadi Police Station, Bengaluru city have seized the following vehicles and such vehicles are lying in the police station as unclaimed so far. Hence the owners of the vehicles and may put their claim one month from the date of this publication.

Bengaluru city
Dated:19.07.2010

XI Addl. Chief Metropolitan,
Magistrate Court, Mayohall,
Bangalore city.

List of the seized vehicles are lying in Banasawadi Police Station, Bengaluru city which have been seized under C.miss and other Cr. Numbers.

| ಕ್ರ. ಸಂ. | ಮೊ.ಸಂ. & ಕಲಂ | ಪಿ.ಎಫ್. ನಂ. | ಸ್ವತ್ತಿನ ವಿವರಗಳು |
|---|---|---|---|
| 1. | 11/05 ಕಲಂ 379 ಐಪಿಸಿ | 37/05 | ಒಂದು ಯಮಹಾ ಕೆಎ–2–ಇ–2211 ಇಂಜಿನ್ ನಂ.E30DEO5608, Chasis No.057221 |

| ಕ್ರ. ಸಂ. | ಮೊ.ಸಂ. & ಕಲಂ | ಪಿ.ಎಫ್. ನಂ. | ಸ್ವತ್ತಿನ ವಿವರಗಳು |
|---|---|---|---|
| 2. | 121/05 ಕಲಂ 394 ಐ.ಪಿ.ಸಿ. | 39/05 | ನೀಲಿಬಣ್ಣದ ಯಮಹ ಮೋಟಾರ್ ಸೈಕಲ್ ನಂ. ಸಿಕೆಹೆಚ್–3951<br>Eng.L7127180, Chasis No.L7127180 |
| 3. | 225/05 ಕಲಂ 457, 380 ಐಪಿಸಿ | 62/05 | 1. ಎಲ್.ಎಮ್.ಎಲ್. ಸ್ಕೂಟರ್ ಕೆಎ–04–4558<br>ಇಂಜಿನ್ ನಂ.ಇಲ್ಲ, ಚಾಸೀಸ್ ನಂ.ಇಲ್ಲ<br>2. ಕೈನೆಟಿಕ್ ಹೊಂಡ ಕೆಎ–05–1885<br>ಇಂಜಿನ್ ನಂ.ಇಲ್ಲ, ಚಾಸೀಸ್ ನಂ.ಇಲ್ಲ.<br>3. ಹೀರೋ ಶಕ್ತಿ ಕೆಂಪುಬಣ್ಣದ ಮೋಟಾರ್ ಸೈಕಲ್ ನಂ.ಇಲ್ಲ–ಇಂಜಿನ್ ನಂ. ED583780 ಚಾಸೀಸ್ ನಂ. MD397LIBRVC581147 |
| 4. | 360/05 ಕಲಂ 392 ಐಪಿಸಿ | 117/05 | ಕೈನೆಟಿಕ್ ಹೊಂಡಾ ನಂ.ಇಲ್ಲ, ಇಂಜಿನ್ ನಂ.ಇಲ್ಲ, ಚಾಸೀಸ್ ನಂ.ಇಲ್ಲ |
| 5. | 433/08 ಕಲಂ 102 ಸಿ.ಆರ್.ಪಿ.ಸಿ. | 152/08 | ಸುಜುಕಿ ಸಮುರೈ ನಂ.ಕೆಎ–01–ಎಸ್–4322<br>Chasis No.7104 F911961, Eng. No.E504M965504 |
| 6. | 600/08 ಕಲಂ 379 ಐಪಿಸಿ | 203/08 | ಬಜಾಜ್ ಪಲ್ಸರ್ ಕೆಂಪು ಬಣ್ಣ ಕೆಎ–05–ಇಜೆ–620<br>Chasis No.DJVBJC15088, Eng. No.DJGBJC15052 |
| 7. | 600/08 ಕಲಂ 379 ಐಪಿಸಿ | 205/08 | ಟಿವಿಎಸ್ ಸ್ಟಾರ್ ಸಿಟಿ ಕೆಎ–03–ಇಜೆಡ್–6863<br>Ch.No.M625KC5X71 F08677, Eng. No.AFSF71869072 |
| 8. | ಸಿಮೀಸ್ ನಂ.07/09 | 77ಎ/09 | ಕೈನೆಟಿಕ್ ಹೊಂಡ ಕೆಎ–03–ಯು–8396 Eng No.204344 |
| 9. | ಸಿಮೀಸ್ ನಂ.8/09 | 78/09 | ಸುಜುಕಿ ಸಮುರಾಯ್ ಕೆಎ–03–ಎಕ್ಸ್–6506<br>Chasis No.790SF317160 Eng. No.79055MB66107 |
| 10. | ಸಿಮಿಸ್ ನಂ.9/09 | 79/09 | ಟಿವಿಎಸ್ ಫಿಯಾರೋ ಕೆಎ–03–ಇಎಲ್–54<br>ಇಂಜಿನ್ ನಂ.ಇಲ್ಲ ಚಾಸೀಸ್ ನಂ.ಇಲ್ಲ |
| 11. | ಸಿಮಿಸ್ ನಂ.12/09 | 83/09 | ಬಜಾಜ್ ಚೇತಕ್ ಕೆಎ–03–ಇಎ–3539<br>Chasis No.06EFBFM49607, Eng. No.24380 |
| 12. | ಸಿಮಿಸ್ ನಂ.14/09 | 98/09 | ಯಮಹಾ ಆರ್.ಎಕ್ಸ್ 100 ನಂ.ಕೆಎ–02–ವೈ–9747,<br>ಚಾಸೀಸ್ ಮತ್ತು ಇಂಜಿನ್ ನಂಬರ್ ಅಳಿಸಿ ಹೋಗಿರುತ್ತೆ. |
| 13. | ಸಿಮಿಸ್ ನಂ.15/09 | 99/09 | ಹಿರೋ ಹೊಂಡಾ ಸ್ಪ್ಲೆಂಡರ್ ನಂ.ಗೊತ್ತಿಲ್ಲ.<br>Chasis No.02120F43784, Eng. No.1579CM3GBG |
| 14. | ಸಿಮಿಸ್ ನಂ.18/09 | 104/09 | ಟಿವಿಎಸ್ ಸ್ಟಾರ್ ಸಿಟಿ ನಂ.ಕೆಎ–04–ಈಆರ್–4129,<br>Chasis No.MD625KF50626356, Eng. No.AF5G61500515 |

| ಕ್ರ. ಸಂ. | ಮೊ.ಸಂ. & ಕಲಂ | ಪಿ.ಎಫ್. ನಂ. | ಸ್ವತ್ತಿನ ವಿವರಗಳು |
|---|---|---|---|
| 15. | ಸಿಮಿಸ್ ನಂ.19/09 | 105/09 | ಕೈನೆಟಿಕ್ ಹೊಂಡಾ ನಂ.ಕೆಎ–03–ಈಸಿ–8943,<br>Eng. No.185705 |
| 16. | 292/09 ಕಲಂ 392 ಐಪಿಸಿ | 174/09<br>ಐಟಂ ನಂ.4 | ಕೆಂಪುಬಣ್ಣದ ಟಿವಿಎಸ್ ಸ್ಟಾರ್ ಸಿಟಿ ಕೆಎ–04–ಇ–2037<br>Ch. No.MDG25KF05414, Eng. No. AF5P5111122 |
| 17. | 292/09 ಕಲಂ 392 ಐಪಿಸಿ | 174/09 ಐಟಂ ನಂ.5 | ಟಿವಿಎಸ್ ಅಪಾಚಿ ಗ್ರೇ ಬಣ್ಣದ ನೊಂದಣಿ ಸಂಖ್ಯೆ ಇರುವುದಿಲ್ಲ.<br>Ch. No.MD634KE4982L32326, Eng. No.OEAL82133695 |
| 18. | 292/09 ಕಲಂ 392 ಐಪಿಸಿ | 175/09 | ಕೆಂಪು ಬಣ್ಣದ ಅಪಾಚಿ ನಂ.ಕೆಎ–07 ಕ್ಯೂ–3139<br>Ch. No.MD624HE3862L74321, Eng. No.0E3L62074339 |
| 19. | 292/09 ಕಲಂ 392 ಐಪಿಸಿ | 176/09 ಐಟಂ ನಂ.1 | ಕೆಂಪು ಬಣ್ಣದ ಬಜಾಜ್ ಕವಾಸಕಿ ನಂ.ಸಿಎಪಿ–5629<br>Ch. No.30P009943, Eng. No.30LD10417 |
| 20. | 396/09 ಕಲಂ 379 ಐಪಿಸಿ | 144/09 | ಮಾರುತಿ ಓಮಿನಿ ಕೆಎ–02–ಎಂ–2920<br>Ch. No.ST9NN659500, Eng. No.F88796CCF831N28125 |
| 21. | 426/09 ಕಲಂ 379 ಐಪಿಸಿ | 152/09 | ಹಿರೋ ಹೊಂಡಾ ಸ್ಪ್ಲೆಂಡರ್ ನಂ.ಕೆಎ–05–ಎಸ್–4152<br>Ch. No.97G19F09731, Eng. No.97G17E09442 |
| 22. | 426/09 ಕಲಂ 379 ಐಪಿಸಿ | 153/09 | ಬಜಾಜ್ ಸಿಟಿ 100 ನಂ.ಕೆಎ–02–ಈಎನ್.2312<br>Ch. No.DUFBLE71956, No Eng. No.<br>ಬಜಾಜ್ ಪಲ್ಸರ್ ನಂ.ಕೆಎ–02–ಈಆರ್.9881<br>Ch. No.MD2DHDHZZTCE71713 Eng. No.DHGBPE10149 |
| 23. | 292/09 ಕಲಂ 392 ಐಪಿಸಿ | 176/09 | 1. ಬಜಾಜ್ ಕವಾಸಕಿ ನಂ.ಸಿ.ಎ.ಪಿ. 5629<br>Ch. No.3DCDO9943, Eng. No.3DED10417<br>2. ಆಕ್ಟಿವಾ ಹೊಂಡಾ ಕೆಎ–03–ಈಟಿ–8218,<br>Ch.No.30C009943, Eng. No.JF0816159375 |
| 24. | 509/09 ಕಲಂ 379 ಐಪಿಸಿ | 216/09 | 1. ಟಿವಿಎಸ್ ಮ್ಯಾಕ್ಸ್ ನಂ.ಕೆಎ–05 ಈಪಿ–7505,<br>Ch.No.1309T688799, Eng.No.N6309M647640<br>2. ಸುಜುಕಿ ಸಮುರಾಯ್ ನಂ.ಕೆಎ–04–ಯು–3389<br>Ch.No.780IM997509, No Eng. No. |
| 25. | 509/09 ಕಲಂ 379 ಐಪಿಸಿ | 217/09 | ಹಿರೋ ಹೊಂಡಾ ಪ್ಯಾಷನ್ ನಂ.ಕೆಎ–03–ಈಈ–5327 |

| ಕ್ರ. ಸಂ. | ಮೊ.ಸಂ. & ಕಲಂ | ಪಿ.ಎಫ್. ನಂ. | ಸ್ವತ್ತಿನ ವಿವರಗಳು |
|---|---|---|---|
| 26. | 509/09 ಕಲಂ 379 ಐಪಿಸಿ | 218/09 | 1. ಕೆಂಪು ಬಣ್ಣದ ಹಿರೋ ಹೊಂಡಾ ನಂ.ಇಲ್ಲ. Eng. No.931110E01490<br>2. ಒಂದು ಕಪ್ಪು ಬಣ್ಣದ ಹೀರೋ ಹೊಂಡಾ ಸ್ಪ್ಲೆಂಡರ್ ನಂ. ಇರುವುದಿಲ್ಲ.<br>Ch.No. MBLHAI0EE89B087, Eng. No.HA10EA89B68677 |
| 27. | 26/10 ಕಲಂ 379 ಐಪಿಸಿ | 12/10 | 1. ಬಜಾಜ್ ಸಿಟಿ–100 ನಂ.ಕೆಎ–03–ಇಎನ್–2317<br>Ch.No.DUFBLE91956, Eng. No.DUFBLE02407<br>2. ಒಂದು ಟಿವಿಎಸ್. ಅಪಾಚಿ ನಂ.ಕೆಎ–03–ಇಎಕ್ಸ್–1421<br>Ch.No.MD624HE3722A100023 Eng.No.DE3A72110781 |
| 28. | 26/10 ಕಲಂ 379 ಐಪಿಸಿ | 13/10 | 1. ಬಜಾಜ್ ಪಲ್ಸರ್ ನಂ.ಕೆಎ–04–ಈಆರ್–3011<br>Ch.No.DHVBHA05187, Eng.No.DHGBHA04016<br>2. ಹೀರೋ ಹೊಂಡಾ ನಂ.ಕೆಎ–04–ಈಡಿ–1288<br>Ch.No.02F2F32287, Eng.No.02FKSE30620 |
| 29. | 80/10 ಕಲಂ 379 ಐಪಿಸಿ | 25/10 | 1. ಕಪ್ಪು ಬಣ್ಣದ ಬಜಾಜ್ ಸಿಟಿ–100 ನಂ.ಕೆಎ–04–ಇಕೆ–86<br>Ch. No.DUFBLJ07055 Eng.No.DUMDL383761<br>2. ಹೀರೋ ಹೋಂಡಾ ಸ್ಪ್ಲೆಂಡರ್ ಕಪ್ಪುಬಣ್ಣ ಕೆಎ–01–ಇಜಿ–7916<br>Ch.No.02L20C01310 Eng.No.2L18M127770 |
| 30. | 80/10 ಕಲಂ 379 ಐಪಿಸಿ | 26/10 | 1. ಕೆಂಪು ಬಣ್ಣದ ಬಜಾಜ್ ಪಲ್ಸರ್ ನಂ.ಕೆಎ–51–ಎಲ್–3500<br>Ch.No.M02D11DJZZPCA91760, Eng.No.DJGBPA26489. |
| 31. | 80/10 ಕಲಂ 379 ಐಪಿಸಿ | 26/10 | 1. ನೀಲಿ ಬಣ್ಣದ ಬಜಾಜ್ ಕೆಬಿ–100, ನಂ.ಕೆಎ–04–ಹೆಚ್–4108<br>Ch.No.C0CH042545, Eng.No.E30CH042007. |
| 32. | C.Miss No.8/10 | 87/10 | Hero Honda Splendor KA-05-EF-7567<br>Chasis No.00M2OC34147, Eng.No.00M10M34233 |
| 33. | C.Miss No.8/10 | 87/10 | TVS Scooty No.KA-02-U-9541<br>Chasis No.K-97FF117732, Eng.No.K97FM119343 |

| ಕ್ರ. ಸಂ. | ಮೊ.ಸಂ. & ಕಲಂ | ಪಿ.ಎಫ್. ನಂ. | ಸ್ವತ್ತಿನ ವಿವರಗಳು |
|---|---|---|---|
| 34. | C.Miss No.8/10 | 87/10 | Yamaha RX-100 KA-06-E-1328<br>Chasis No.1L1193606, Eng.No.1L1193606 |
| 35. | C.Miss No.9/10 | 88/10 | Kinetic Honda Black KA-03-Y-6590,<br>Chasis No.Eng.No. |
| 36. | C.Miss No.9/10 | 88/10 | TVS Apache Silver KA-51H-4857<br>Cha.No.MD624HE3862C02785, Eng.No.OE3C62002453 |
| 37. | C.Miss No.10/10 | 98/10 | Yamaha RX White Colour No.Reg.No.<br>Chasis No.IL5020674, Eng.No.IL5020674 |
| 38. | C.Miss No.10/10 | 98/10 | Kinetic Honda Black KA-04-E-8348,<br>Chasis No.393750, Eng.No.383762NIEJJ |
| 39. | C.Miss No.10/10 | 98/10 | Kinetic Honda Black KA-01-H-4203,<br>Chasis No.302621, Eng.No.HH300488 |
| 40. | C.Miss No.12/10 | 100/10 | Bajaj Pulsar Purple KA-03-EG-8241,<br>Chasis No.DJVBJE20798, Eng.No.DJGBJG26511 |
| 41. | C.Miss No.12/10 | 100/10 | TVS XL Super Green KA-03-ET-6117,<br>Chasis No.MD621AD1652H48652, Eng.No.MDF1103112210 |
| 42. | C.Miss No.12/10 | 100/10 | Yamaha Red KL-11-J-9882<br>Chasis No.4LS043771, Eng.No.4LS043771 |
| 43. | C.Miss No.12/10 | 100/10 | Kinetic Marval Black KA-01-L-8232,<br>Chasis No.- Eng.No.991972IETE |
| 44. | C.Miss No.11/10 | 99/10 | Hero Puch Automatic Black KA-03-V-2773,<br>Chasis No.MD397HIBREE554549, Eng.No.ED557674 |
| 45. | C.Miss No.11/10 | 99/10 | Kinetic Zoom Meroon KA-03, EE-9431,<br>Chasis No.NIF UA282535, Eng.No.FTUA25607 |
| 46. | C.Miss 13/10 | 101/10 | Kinetic Honda Blue KA-05-B-4972,<br>Chasis No.765757, Eng.No.NIEPB 759952 |
| 47. | C.Miss 13/10 | 101/10 | Kinetic Honda Black KA-03-V-7254,<br>Chas.No. NIFPL 829476, Eng.No.NIEPL 824205 |

| ಕ್ರ. ಸಂ. | ಮೊ.ಸಂ. & ಕಲಂ | ಪಿ.ಎಫ್. ನಂ. | ಸ್ವತ್ತಿನ ವಿವರಗಳು |
|---|---|---|---|
| 48. | C.Miss 13/10 | 101/10 | Scooty ES KA-09-S-2843,<br>Chasis No.K98EF189250, Eng.No.K98EM191196 |

XI Addl.Chief Metropolitan,

PR-1106 Magistrate Court, Mayo Hall, Bangalore City.

**PROCEEDINGS OF THE ADVOCATE GENERAL FOR KARNATAKA, BANGALORE**

**NOTIFICATION**

**PREAMBLE:**

1. Consequent upon the promotion of Shri N. Dhruva and Shri P. thipperudrappa, Section Officers as Assistant Administrative Officers, Two Posts of Sections Officers have fallen vacant and they need to be filled up by way of promotion from the two feeding cadres of First Division Assistants and Stenographers.

2. The Government vide its Order No.DPAR 75 SayNayNe 2010, Dated:19.05.2010 has constituted the concerned Head of the Department as the Authority to promote the Officials to Group B Posts under the State Civil Services. Thus, the Advocate General being the Head of the Department of Advocate General, is the competent Authority to effect promotions to the two existing posts of Section Officers, which are Group B Posts under the State Civil Services.

3. In are above circumstances, the learned Advocate General has first considered the cases of Shri Jarimalli Prakash Srinivas Rao, First Division Assistant and Shri L. Balaraju, Stenographer for promotion as Section Officers. Since Shri L. Balaraju, seniormost Stenographer has in his Representation Dated:17.05.2010 requested that his name be deleted from the zone of consideration for the said Post and that he voluntarily foregoes promotion as Section Officer, the case of Shri N. Chikkanna, the next seniormost Stenographer has been considered. Since the said two Posts are unreserved and that Shri Jarimalli Prakash Srinivas Rao and Shri N. Chikkanna have the required eligibility, qualifications and necessary merit, the learned Advocate General after considering all the necessary materials on record, has passed orders on 01.07.2010 to promote Shri Jarimalli Prakash Srinivas Rao and Shri N. Chikkanna as Section Officers against the two existing Posts of Section Officers at the Dharwad Unit Office, Dharwad.

**OFFICE ORDER NO.40/AG/EST/2010-11, DATED:5<sup>TH</sup> JULY, 2010**

The following Officials, who are working respectively as First Division Assistant and Stenographer in the Office of the Advocate General are promoted to the Posts of Section Officers in the pay-scale of Rs.11,400-21,600 and posted to the Unit Office of the Advocate General, Dharwad Unit, Dharwad against the two existing Posts of Section Officers with immediate effect.

| Sl. No. | Name, designation and present place of working | Promoted and place of posting |
|---|---|---|
| 1. | Shri Jarimalli Prakash<br>Srinivas Rao,<br>First Division Assistant, O/o Advocate General,<br>Bangalore-560 001. | Shri Jarimalli Prakash<br>Srinivas Rao, promoted as Section Officer and posted to Unit Office of the Advocate General, Dharwad Unit, Dharwad, against the existing Post of Section Officer. |

| Sl. No. | Name, designation and present place of working | Promoted and place of posting |
|---|---|---|
| 2. | Shri N. Chikkanna,<br>Stenographer,<br>O/o Advocate General, Bangalore-560 001. | Shri N. Chikkanna, promoted as Section Officer and posted to Unit Office of the Advocate General, Dharwad Unit, Dharwad, against the existing Post of Section Officer. |

By Order of the Advocate General.

PR-1079

**M. KRISHNAPPA**

Administrative Officer.

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಯವರ ಕಛೇರಿ, ಉಡುಪಿ

## ಪ್ರಕಟಣೆ

**ಸಂಖ್ಯೆ:ಬಿಸಿಎಂಉ:ಹಿವಕಾತಶೀವೆ:ಸಿಆರ್:32:2010–11, ದಿನಾಂಕ:8ನೇ ಜುಲೈ, 2010**

**ವಿಷಯ:** ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಕುರಿತು.

**ಉಲ್ಲೇಖ:** (1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68:ಎಸ್‌ಇಡಬ್ಲ್ಯೂ89:ದಿನಾಂಕ:02.11.1990.

(2) ಸರ್ಕಾರಿ ಆದೇಶ ಸಂಖ್ಯೆ: ಸಕಇ:446:ಬಿಎಂಎಸ್:2005, ದಿನಾಂಕ:01.11.2005.

ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ವಕೀಲಿ ವೃತ್ತಿಯಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಜಿಲ್ಲೆಯ ಅರ್ಹ ಮತ್ತು ಆಸಕ್ತ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಕಛೇರಿ ಕೆಲಸದ ಸಮಯದಲ್ಲಿ ಪಡೆದುಕೊಳ್ಳಬಹುದು.

1) ಅರ್ಜಿ ಸಲ್ಲಿಸುವ ಕಾನೂನು ಪದವೀಧರರು ಹಿಂದುಳಿದ ವರ್ಗಗಳ ಪ್ರವರ್ಗ–1, 2ಎ, 3ಎ ಮತ್ತು 3ಬಿ ಗಳಿಗೆ ಸೇರಿದವರಾಗಿರಬೇಕು ಪ್ರವರ್ಗ 1ನ್ನು ಹೊರತುಪಡಿಸಿ ಇತರೆ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿ ಪೋಷಕರ ಕುಟುಂಬದ ವಾರ್ಷಿಕ ಆದಾಯವು ರೂ.15000/–ಗಳ ಮಿತಿಯಲ್ಲಿರಬೇಕು.

2) ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಿಂದ ಹಿಂದಿನ ಎರಡು ವರ್ಷಗಳೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

3) ಹಿಂದುಳಿದ ವರ್ಗಗಳ ಪ್ರವರ್ಗ–2ಎ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ 30 ವರ್ಷಗಳ ವಯೋಮಿತಿಯಲ್ಲಿ ಇರಬೇಕು. ಪ್ರವರ್ಗ 1ಕ್ಕೆ ಸೇರಿದ ಅಭ್ಯರ್ಥಿಗಳು ಗರಿಷ್ಠ 31 ವರ್ಷಗಳ ವಯೋಮಿತಿಯೊಳಗಿರಬೇಕು.

4) ಅಭ್ಯರ್ಥಿಗಳು ತಮ್ಮ ಹೆಸರನ್ನು ಬಾರ್‌ಕೌನ್ಸಿಲ್‌ನಲ್ಲಿ ನೊಂದಾಯಿಸಿರಬೇಕು.

5) ತರಬೇತಿಗೆ ಆಯ್ಕೆಯಾಗುವ ಅಭ್ಯರ್ಥಿಗಳಿಗೆ ಅನುಭವಿ ಹಾಗೂ ನುರಿತ ವಕೀಲರ ಅಧೀನದಲ್ಲಿ ವಕೀಲಿ ವೃತ್ತಿಯಲ್ಲಿ ತರಬೇತಿ ಕೊಡಿಸಿ ನಾಲ್ಕು ವರ್ಷಗಳ ವರೆಗೆ ಮಾಹೆಯಾನ ರೂ.1000/–ಗಳಂತೆ ಶಿಷ್ಯವೇತನ ನೀಡಲಾಗುವುದು.

6) ಆಸಕ್ತ ಅಭ್ಯರ್ಥಿಗಳು ನಿಗದಿತ ಅರ್ಜಿಯನ್ನು ಪಡೆದು ಸಂಪೂರ್ಣವಾಗಿ ಭರ್ತಿ ಮಾಡಿ ಕಾನೂನು ಪದವಿಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿಗಳ ದೃಢೀಕೃತ ಪ್ರತಿಗಳು, ಬಾರ್‌ಕೌನ್ಸಿಲ್ ನೊಂದಾವಣೆ ಪತ್ರದ ಪ್ರತಿ ಮತ್ತು ಜಾತಿ, ಆದಾಯ ಪ್ರಮಾಣ ಪತ್ರಗಳನ್ನು ಲಗತ್ತಿಸಿ ಸಲ್ಲಿಸಬೇಕು.

7) ಅರ್ಜಿಗಳನ್ನು ಅವಶ್ಯವಿರುವ ದಾಖಲಾತಿಗಳೊಡನೆ ದಿನಾಂಕ:21.08.2010ರೊಳಗೆ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ ಇವರಿಗೆ ಸಲ್ಲಿಸಬೇಕು.

8) ನಿಗದಿತ ದಿನಾಂಕದ ನಂತರ ಬರುವ ಮತ್ತು ಅಪೂರ್ಣವಾದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ, ಇವರನ್ನು ಸಂಪರ್ಕಿಸಬಹುದು. (ದೂರವಾಣಿ ಸಂಖ್ಯೆ:0820–2531581).

ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಇಲಾಖೆ, ಉಡುಪಿ.

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಯವರ ಕಛೇರಿ, ಉಡುಪಿ

### ಪ್ರಕಟಣೆ

**ಸಂಖ್ಯೆ:ಬಿಸಿಎಂಉ:ಅ.ಸಂಕಾ.ತ.ಶೀ.ವೆ:ಸಿಆರ್:33:2010–11, ದಿನಾಂಕ:8ನೇ ಜುಲೈ, 2010**

**ವಿಷಯ:** ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಅರ್ಜಿಗಳನ್ನು ಆಹ್ವಾನಿಸುವ ಕುರಿತು.

**ಉಲ್ಲೇಖ:** (1) ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್68:ಎಸ್‌ಇಡಬ್ಲ್ಯೂ89:ದಿನಾಂಕ:02.11.1990.

(2) ಸರ್ಕಾರಿ ಆದೇಶ ಸಂಖ್ಯೆ: ಸಕಇ:446:ಬಿಎಂಎಸ್:2005, ದಿನಾಂಕ:01.11.2005.

ಅಲ್ಪಸಂಖ್ಯಾತರ ವರ್ಗಗಳಿಗೆ ಸೇರಿದ (ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು ಮತ್ತು ಸಿಕ್ಕರು) ಕಾನೂನು ಪದವೀಧರರಿಗೆ ವಕೀಲ ವೃತ್ತಿಯಲ್ಲಿ ತರಬೇತಿ ನೀಡಿ ಶಿಷ್ಯವೇತನ ಮಂಜೂರು ಮಾಡಲು ಜಿಲ್ಲೆಯ ಅರ್ಹ ಮತ್ತು ಆಸಕ್ತ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿತ ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಕಛೇರಿ ಕೆಲಸದ ಸಮಯದಲ್ಲಿ ಪಡೆದುಕೊಳ್ಳಬಹುದು.

1) ಅರ್ಜಿ ಸಲ್ಲಿಸುವ ಕಾನೂನು ಪದವೀಧರರು ಅಲ್ಪಸಂಖ್ಯಾತರ ಸಮುದಾಯಕ್ಕೆ (ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು ಮತ್ತು ಸಿಕ್ಕರು) ಸೇರಿದವರಾಗಿರಬೇಕು. ಅಭ್ಯರ್ಥಿಗಳ ಕುಟುಂಬದ ವಾರ್ಷಿಕ ಆದಾಯವು ರೂ.15000/–ಗಳ ಮಿತಿಯಲ್ಲಿರಬೇಕು.

2) ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಿಂದ ಹಿಂದಿನ ಎರಡು ವರ್ಷಗಳೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

3) ಅಭ್ಯರ್ಥಿಗಳು ತಮ್ಮ ಹೆಸರನ್ನು ಬಾರ್‌ಕೌನ್ಸಿಲ್‌ನಲ್ಲಿ ನೊಂದಾಯಿಸಿರಬೇಕು.

4) ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ 30 ವರ್ಷಗಳ ವಯೋಮಿತಿಯಲ್ಲಿ ಇರಬೇಕು.

5) ತರಬೇತಿಗೆ ಆಯ್ಕೆಯಾಗುವ ಅಭ್ಯರ್ಥಿಗಳಿಗೆ ಅನುಭವಿ ಹಾಗೂ ನುರಿತ ವಕೀಲರ ಅಧೀನದಲ್ಲಿ ವಕೀಲಿ ವೃತ್ತಿಯಲ್ಲಿ ತರಬೇತಿ ಕೊಡಿಸಿ ನಾಲ್ಕು ವರ್ಷಗಳ ವರೆಗೆ ಮಾಹೆಯಾನ ರೂ.1000/–ಗಳ ಶಿಷ್ಯವೇತನ ನೀಡಲಾಗುವುದು.

6) ಆಸಕ್ತ ಅಭ್ಯರ್ಥಿಗಳು ನಿಗದಿತ ಅರ್ಜಿಯನ್ನು ಪಡೆದು ಸಂಪೂರ್ಣವಾಗಿ ಭರ್ತಿ ಮಾಡಿ ಕಾನೂನು ಪದವಿಗೆ ಸಂಬಂಧಿಸಿದ ಎಲ್ಲಾ ಅಂಕಪಟ್ಟಿಗಳ ದೃಢೀಕೃತ ಪ್ರತಿಗಳು, ಬಾರ್‌ಕೌನ್ಸಿಲ್ ನೊಂದಾವಣೆ ಪತ್ರದ ಪ್ರತಿ ಮತ್ತು ಜಾತಿ, ಆದಾಯ ಪ್ರಮಾಣ ಪತ್ರಗಳನ್ನು ಲಗತ್ತಿಸಿ ಸಲ್ಲಿಸಬೇಕು.

7) ಅರ್ಜಿಗಳನ್ನು ಅವಶ್ಯವಿರುವ ದಾಖಲಾತಿಗಳೊಡನೆ ದಿನಾಂಕ:21.08.2010ರೊಳಗೆ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ ಇವರಿಗೆ ಸಲ್ಲಿಸಬೇಕು.

8) ನಿಗದಿತ ದಿನಾಂಕದ ನಂತರ ಬರುವ ಮತ್ತು ಅಪೂರ್ಣವಾದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಸಾರಥಿಭವನ, ಅಜ್ಜರಕಾಡು, ಉಡುಪಿ, ಇವರನ್ನು ಸಂಪರ್ಕಿಸಬಹುದು. (ದೂರವಾಣಿ ಸಂಖ್ಯೆ:0820–2531581).

ಜಿಲ್ಲಾ ಅಧಿಕಾರಿ, ಹಿಂದುಳಿದ ವರ್ಗಗಳ ಮತ್ತು
ಅಲ್ಪಸಂಖ್ಯಾತರ ಇಲಾಖೆ, ಉಡುಪಿ.

ಪಿ.ಆರ್.1107

## ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ಉತ್ತರಕನ್ನಡ, ಕಾರವಾರ

### ಪ್ರಕಟಣೆ

**ಸಂಖ್ಯೆ:ಬಿಸಿಎಂ:ನಿಲಯ:ಕಾತಭ:ಸಿಆರ್–27:2010–11, ದಿನಾಂಕ:15ನೇ ಜುಲೈ, 2010**

**ವಿಷಯ:** 2010–11ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ತರಬೇತಿ ನೀಡುವ ಕುರಿತು.

2010–11ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆಯ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ವಕೀಲ ವೃತ್ತಿ ಮತ್ತು ಜ್ಯೂಡಿಶಿಯಲ್ ಸೇವೆಗೆ ಸಂಬಂಧಿಸಿದಂತೆ ನ್ಯಾಯಾಡಳಿತದಲ್ಲಿ 4 ವರ್ಷಗಳ ತರಬೇತಿ ನೀಡುವ ಕುರಿತು ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಿದೆ. ಆಸಕ್ತ ಹಿಂದುಳಿದ ವರ್ಗಗಳ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಅರ್ಜಿಗಳನ್ನು ದಿನಾಂಕ:16.08.2010ರ ಒಳಗಾಗಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು

ಅಲ್ಪಸಂಖ್ಯಾತರ ಅಧಿಕಾರಿಗಳು, ಉತ್ತರ ಕನ್ನಡ, ಕಾರವಾರ ರವರಿಗೆ ಸಲ್ಲಿಸತಕ್ಕದ್ದು. ನಿಗದಿತ ನಮೂನೆಗಳನ್ನು ಈ ಕಛೇರಿಯಿಂದ ಪಡೆಯಬಹುದಾಗಿದೆ.

**ನಿಬಂಧನೆಗಳು:**

1) ಅಭ್ಯರ್ಥಿಯು ಕಾನೂನು ಪದವಿ ಮಾಡಿರಬೇಕು. ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು. ರಾಜ್ಯದ ನಿವಾಸಿಯಾಗಿರಬೇಕು. ವಕೀಲಿ ವೃತ್ತಿ ಅಭ್ಯಾಸ (ಪ್ರಾಕ್ಟೀಸ್) ನಿಗದಿಪಡಿಸಿರುವ ಅರ್ಹತೆ ಹೊಂದಿದ್ದು ತರಬೇತಿಗೆ ಅರ್ಜಿ ಸಲ್ಲಿಸುವ ದಿನಾಂಕಕ್ಕಿಂತ ಮುಂಚಿತವಾಗಿ ಎರಡು ವರ್ಷದೊಳಗೆ ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೋಂದಾಯಿಸಿಕೊಂಡಿರತಕ್ಕದ್ದು.

2) ಕಾನೂನು ತರಬೇತಿ ಭತ್ಯೆಗಾಗಿ ಜಿಲ್ಲೆಯಿಂದ ಹತ್ತು (10) ಅಭ್ಯರ್ಥಿಗಳನ್ನು ಮಾತ್ರ ಆಯ್ಕೆ ಮಾಡಲಾಗುವುದು. ಪ್ರವರ್ಗ–1, 2ಎ, 3ಎ, 3ಬಿ, (3ಬಿ ಯಲ್ಲಿ ಕ್ರಿಶ್ಚಿಯನ್ ಮತ್ತು ಜೈನರುಗಳನ್ನು ಹೊರತುಪಡಿಸಿ)

3) ಅಭ್ಯರ್ಥಿಗಳ ಪಾಲಕರು/ ಪೋಷಕರ ವಾರ್ಷಿಕ ಆದಾಯ ಮಿತಿ ರೂ.15,000.00 ಒಳಗಿರಬೇಕು. ಪ್ರವರ್ಗ–1 ರಡಿಯಲ್ಲಿ ಬರುವ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.

4) ತರಬೇತಿ ಅವಧಿಯು ನಾಲ್ಕು ವರ್ಷಗಳು ತರಬೇತಿ ಅವಧಿಯಲ್ಲಿ ಮಾಹೆಯಾನ ರೂ.1,000.00 ರಂತೆ ತರಬೇತಿ ಭತ್ಯೆ ನೀಡಲಾಗುವುದು.

5) ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ ವಯೋಮಿತಿ 31 ವರ್ಷಗಳು, ಇತರೇ ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ 30 ವರ್ಷಗಳು ಮೀರಿರಬಾರದು.

6) ಅಭ್ಯರ್ಥಿ ಕಾನೂನು ಪದವಿ ಮುಗಿಸಿ ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕಕ್ಕೆ ಎರಡು ವರ್ಷ ಒಳಗೊಂಡಿರಬೇಕು.

7) ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ಹಿರಿಯ ವಕೀಲರ ಹತ್ತಿರ ತರಬೇತಿಗೆ ನಿಯೋಜಿಸಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಆದಾಯ, ಜಾತಿ ಪ್ರಮಾಣ ಪತ್ರ ನೀಡಿ ಆಯ್ಕೆಯಾಗಿರುವುದು ಕಂಡು ಬಂದಲ್ಲಿ ಶಿಕ್ಷೆಗೆ ಗುರಿಪಡಿಸಿ ತರಬೇತಿ ಭತ್ಯೆ ನೀಡಿರುವ ಒಟ್ಟು ಹಣದ ಜೊತೆಗೆ ಶೇಕಡಾ 10% ಬಡ್ಡಿ ಸೇರಿ ಕಂದಾಯ ಬಾಕಿ ರೂಪದಲ್ಲಿ ವಸೂಲು ಮಾಡಲಾಗುವುದು.

9) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯಂತರದಲ್ಲಿ ಬಿಟ್ಟು ಹೋದಲ್ಲಿ ಪಡೆಯಲಾದ ಭತ್ಯೆಯ ಒಟ್ಟಿಗೆ ಶೇಕಡಾ 10% ರಷ್ಟು ಬಡ್ಡಿ ಸೇರಿಸಿ ಸರ್ಕಾರಕ್ಕೆ ಭರಣ ಮಾಡುವುದು.

10) ಅಪೂರ್ಣ ಹಾಗೂ ಸಕಾಲದಲ್ಲಿ ಬಾರದ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು.

ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು
ಪಿ.ಆರ್.1132 ಅಲ್ಪಸಂಖ್ಯಾತರ ಅಧಿಕಾರಿ, ಕಾರವಾರ.

**ಜಿಲ್ಲಾ ಪಂಚಾಯತ್, ಚಿತ್ರದುರ್ಗ**

**ಜಿಲ್ಲಾ ಅಧಿಕಾರಿಗಳವರ ಕಾರ್ಯಾಲಯ, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ,**
**ಏರೋಪ್ಲೇನ್ ಬಿಲ್ಡಿಂಗ್, ಚಿತ್ರದುರ್ಗ, ದೂರವಾಣಿ (08194)230327, ಫ್ಯಾಕ್ಸ್:(08194) 230904**

**ಪ್ರಕಟಣೆ ಕೃಪೆಗಾಗಿ**

**ಸಂಖ್ಯೆ:ಹಿಂವಅಇ.ಕಾತಭಮ.ಸಿಆರ್:121/2010–11, ದಿನಾಂಕ:16ನೇ ಜುಲೈ, 2010**

**ವಿಷಯ:** 2010–11ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಕಾನೂನು ಪದವೀಧರರನ್ನು ನ್ಯಾಯಾಂಗ ತರಬೇತಿ ಯೋಜನೆಯಡಿಯಲ್ಲಿ ತರಬೇತಿಗೆ ನಿಯೋಜಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಎಲ್ 68, ದಿನಾಂಕ:02.11.1990

2) ಸರ್ಕಾರದ ಆದೇಶ ಸಂಖ್ಯೆ:ಸಕಇ 446 ಬಿಎಂಎಸ್ 2005, ದಿನಾಂಕ:01.12.2005.

ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ ಪ್ರವರ್ಗ–1, 2(ಎ), 3(ಎ), (ಬಿ) ರಡಿ ಬರುವ ಹತ್ತು ನಿರುದ್ಯೋಗಿ ಕಾನೂನು ಪದವೀಧರರನ್ನು ಹಾಗೂ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಪಾರ್ಸಿ, ಬೌದ್ಧ ಇತ್ಯಾದಿ ವರ್ಗದ ಎರಡು ನಿರುದ್ಯೋಗಿ ಕಾನೂನು ಪದವೀಧರರನ್ನು ನ್ಯಾಯಾಂಗ ತರಬೇತಿ ಯೋಜನೆಯಡಿ 2010–11ನೇ ಸಾಲಿನಲ್ಲಿ ಆಯ್ಕೆ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದೆ. ಆಸಕ್ತರು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ

ಹಾಗೂ ಅಲ್ಪಸಂಖ್ಯಾತರ ಇಲಾಖೆ, ಏರೋಪ್ಲೇನ್ ಬಿಲ್ಡಿಂಗ್ ಚಿತ್ರದುರ್ಗ ಇವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಹೆಚ್ಚಿನ ಮಾಹಿತಿ ಹಾಗೂ ನಿಗದಿತ ಅರ್ಜಿ ನಮೂನೆಗಳನ್ನು ಪಡೆಯಬಹುದಾಗಿದೆ. ಅರ್ಜಿ ಸಲ್ಲಿಸಲು ದಿನಾಂಕ:10.08.2010 ಕಡೆಯ ದಿನಾಂಕವಾಗಿರುತ್ತದೆ.

**ಅರ್ಜಿ ಸಲ್ಲಿಸಲು ಇರುವ ನಿಬಂಧನೆಗಳು:**

1) ಅಭ್ಯರ್ಥಿಯು ಹಿಂದುಳಿದ ವರ್ಗಗಳಿಗೆ ಸೇರಿದ ಪ್ರವರ್ಗ–1, 2(ಎ), 3(ಎ), 3(ಬಿ)ಗೆ ಸೇರಿರಬೇಕು ಹಾಗೂ ಮತೀಯ ಅಲ್ಪಸಂಖ್ಯಾತರ ಸಮುದಾಯಕ್ಕೆ ಸೇರಿದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಇತ್ಯಾದಿ ವರ್ಗದ ಅಭ್ಯರ್ಥಿಗಳಾಗಿರಬೇಕು.

2) ಆಯ್ಕೆ ಮಾಡಲಾಗುವ ಒಟ್ಟಾರೆ ಹಿಂದುಳಿದ ವರ್ಗಗಳ 10 ಅಭ್ಯರ್ಥಿಗಳಲ್ಲಿ ಶೇಕಡಾ 33.33 ರಷ್ಟು ಮಹಿಳಾ ಅಭ್ಯರ್ಥಿಗಳಿಗೆ ಮೀಸಲಿಡಲಾಗುವುದು.

3) ಅಭ್ಯರ್ಥಿಯು ಎಲ್.ಎಲ್.ಬಿ. ಪದವಿಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಮೊದಲು ಎರಡು ವರ್ಷದ ಅವಧಿಯೊಳಗೆ ಪಾಸು ಮಾಡಿರಬೇಕು.

4) ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಡಿ 132 ಎಸ್‌ಪಿಡಿ 97 ದಿನಾಂಕ:08.02.2000ರಂತೆ ನಿಗದಿತ ನಮೂನೆಯಲ್ಲಿ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು. ಮತ್ತು ಪ್ರವರ್ಗ 2(ಎ), 3(ಎ), ಹಾಗೂ 3(ಬಿ) ಅಭ್ಯರ್ಥಿಗಳು ಹಾಗೂ ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದ ಮುಸ್ಲಿಂ, ಕ್ರಿಶ್ಚಿಯನ್, ಜೈನ್ ಇತ್ಯಾದಿ ವರ್ಗಗಳ ಅಭ್ಯರ್ಥಿಗಳಿಗೆ ಆದಾಯ ಮಿತಿ ರೂ.15,000–00ಗಳು ಆಗಿರುತ್ತದೆ. ಪ್ರವರ್ಗ–1ರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.

5) ತರಬೇತಿ ಅವಧಿಯು ನಾಲ್ಕು ವರ್ಷಗಳಾಗಿದ್ದು ತರಬೇತಿಯ ಅವಧಿಯಲ್ಲಿ ಮಾಸಿಕ 1000–00 ರೂ.ಗಳ ತರಬೇತಿ ಭತ್ಯೆ ಪಾವತಿಸಲಾಗುವುದು. ಆಯ್ಕೆಯನ್ನು ಜಿಲ್ಲಾ ಆಯ್ಕೆ ಸಮಿತಿಯ ಮೂಲಕ ನಡೆಸಲಾಗುವುದು.

6) ಅಭ್ಯರ್ಥಿಯು ಕನಿಷ್ಠ ವಯೋಮಿತಿಯು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ 30 ವರ್ಷಗಳು ಮೀರಿರಬಾರದು. ಪ್ರವರ್ಗ–1ರ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿ 31 ವರ್ಷಗಳು ಮೀರಿರಬಾರದು.

7) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೊಂದಾಯಿಸಿರಬೇಕು. ನೋಂದಾಯಿಸಿಲ್ಲದ ಪಕ್ಷದಲ್ಲಿ ಆಯ್ಕೆಯಾದ ತಕ್ಷಣ ನೋಂದಾಯಿಸಿದ ಹೊರತು ಶಿಷ್ಯವೇತನ ಪಾವತಿಸಲಾಗುವುದಿಲ್ಲ.

8) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಜಾತಿ/ ಆದಾಯ ಪ್ರಮಾಣ ಪತ್ರ ಅಥವಾ ಇತರೆ ಯಾವುದೇ ತಪ್ಪು ಮಾಹಿತಿಯನ್ನು ನೀಡಿ ಆಯ್ಕೆಯಾದ ಪಕ್ಷದಲ್ಲಿ ಅಂತಹವರನ್ನು ಶಿಕ್ಷೆಗೆ ಗುರಿಪಡಿಸುವುದಲ್ಲದೆ ಶಿಷ್ಯವೇತನದ ಜೊತೆಗೆ ಶೇಕಡಾ 10ರ ಬಡ್ಡಿಯನ್ನು ಭೂ ಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು. ಅಲ್ಲದೇ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟಲ್ಲಿ ಅವರು ಇಲಾಖೆಯಿಂದ ಪಡೆದ ಪೂರ್ಣ ಶಿಷ್ಯವೇತನವನ್ನು ಹಿಂದಿರುಗಿಸಬೇಕಾಗುವುದು.

9) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು 20 ವರ್ಷಗಳಿಂದ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸುತ್ತಿರುವ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.

10) ಅಪೂರ್ಣ/ ಅವಧಿ ಮೀರಿದ ತಪ್ಪು ಮಾಹಿತಿ ಅಥವಾ ನಿಗದಿತ ದಿನಾಂಕದ ನಂತರ ಸ್ವೀಕರಿಸಲಾದ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೆ ತಿರಸ್ಕರಿಸಲಾಗುವುದು.

ಸದಸ್ಯ ಕಾರ್ಯದರ್ಶಿಗಳು<br>
ಹಾಗೂ ಜಿಲ್ಲಾ ಅಧಿಕಾರಿಗಳು,<br>
ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ<br>
ಇಲಾಖೆ, ಚಿತ್ರದುರ್ಗ.

ಪಿ.ಆರ್.1137

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

## ಪ್ರಕಟಣೆ

### ಸಂಖ್ಯೆ: ಕಾನಿಇಂ/ಸಕಾನಿಇಂ/ಟಿ–182/902–04, ದಿನಾಂಕ:14ನೇ ಜುಲೈ, 2010

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಪೂರೈಕೆ ಕಾಯ್ದೆ 2003, ಸೆಕ್ಷನ್ 67ರ ಅಡಿಯಲ್ಲಿ ಒಂದು ಯೋಜನೆಯನ್ನು ರೂಪಿಸಿದೆ ಮತ್ತು ಇದೇ ಕಾಯ್ದೆ ಸೆಕ್ಷನ್ 67(2)(ಸಿ)ರ ಅನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಯೋಜನೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು

ಮತ್ತು ಇನ್ನಿತರೆ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ.

**ಕೆಲಸದ ಹೆಸರು:** ಹಾಲಿ ಇರುವ 220 ಕೆ.ವಿ. B4 ವಿದ್ಯುತ್ ಮಾರ್ಗದಿಂದ ಹೊಸದಾಗಿ ನಿರ್ಮಿಸಿರುವ 400/220 ಕೆವಿ ಶಾಂತಿ ಗ್ರಾಮ (PGCIL) ವಿದ್ಯುತ್ ಕೇಂದ್ರಕ್ಕೆ 7.755 ಕಿ.ಮೀ. ಉದ್ದದ 220 ಕೆ.ವಿ. ದ್ವಿ–ವಿದ್ಯುತ್ ಮಾರ್ಗ ನಿರ್ಮಿಸುವ ಕಾಮಗಾರಿ.

**ಉದ್ದೇಶ:** ಹಾಸನ ಜಿಲ್ಲೆ ಮತ್ತು ಸುತ್ತಮುತ್ತಲಿನ ಪ್ರದೇಶಗಳ ವೋಲ್‌ಟೇಜ್ ಸ್ಥಿತಿ ಉತ್ತಮ ಪಡಿಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ.

**ಹಾದು ಹೋಗುವ ಪ್ರದೇಶ:** ಯೋಗಿಹಳ್ಳಿ, ಚೋರಿಕೊಪ್ಪಲು, ಗಾಡೇಹಳ್ಳಿ, ಅಮ್ಮನಗುಡಿಕೊಪ್ಪಲು, ಕೆರೆಮುಂದಲಕೊಪ್ಪಲು ಮತ್ತು ಗಾಡೇನಹಳ್ಳಿ ಗ್ರಾಮಗಳ ವ್ಯಾಪ್ತಿಯಲ್ಲಿ ಬರುವ ಪ್ರದೇಶಗಳು.

**ಅಂದಾಜು ವೆಚ್ಚ:** ರೂ.630.11 ಲಕ್ಷಗಳು.

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಅಧಿನಿಯಮ 1885(13) ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರು ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ 30 ದಿನಗಳೊಳಗಾಗಿ ಕಾರ್ಯನಿರ್ವಾಹಕ ಇಂಜಿನಿಯರ್(ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಬೃಕಾವಿ/ಕವಿಪ್ರನಿನಿ/ಹಾಸನ.

ಪಿಡಿ–97

## ಪರಿಶಿಷ್ಠ ವರ್ಗಗಳ ಕಲ್ಯಾಣ ಇಲಾಖೆ

## ಜಿಲ್ಲಾ ಪರಿಶಿಷ್ಠ ವರ್ಗಗಳ ಕಲ್ಯಾಣಾಧಿಕಾರಿಗಳ ಕಾರ್ಯಾಲಯ, ರಾಯಚೂರು

## ಪ್ರಕಟಣೆ

**ಸಂಖ್ಯೆ:ಜಿಪವಕಅರಾ/ಪವ1/ಕಾಪತ/ಸಿಆರ್–7/2010–11, ದಿನಾಂಕ:15ನೇ ಜುಲೈ, 2010**

**ವಿಷಯ:** 2010–11ನೇ ಸಾಲಿನಲ್ಲಿ ಕಾನೂನು ಪದವೀಧರರನ್ನು ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ:ಎಸ್‌ಡಬ್ಲ್ಯೂಎಲ್68:ಎಸ್‌ಇಡಬ್ಲ್ಯೂ:89, ಬೆಂಗಳೂರು, ದಿನಾಂಕ:02.11.1990ರ ಪ್ರಕಾರ.

ಕರ್ನಾಟಕ ಸರ್ಕಾರದ ಆದೇಶದ ಪ್ರಕಾರ 2010–11ನೇ ಸಾಲಿಗೆ ಪರಿಶಿಷ್ಠ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿ ನೀಡುವ ಕಾರ್ಯಕ್ರಮವಿರುತ್ತದೆ. ಆದಕಾರಣ ಅರ್ಹ ಪರಿಶಿಷ್ಠ ವರ್ಗದ ಕಾನೂನು ಪದವೀಧರರು ದಿನಾಂಕ:23.07.2010ರೊಳಗಾಗಿ ಜಿಲ್ಲಾ ಪರಿಶಿಷ್ಠ ವರ್ಗಗಳ ಕಲ್ಯಾಣ ಅಧಿಕಾರಿಗಳು ರಾಯಚೂರುರವರ ಕಾರ್ಯಾಲಯಕ್ಕೆ ಈ ಕೆಳಗೆ ಕಾಣಿಸಿದ ದಾಖಲೆಗಳೊಂದಿಗೆ ನಿಗದಿತ ನಮೂನೆಯಲ್ಲಿ ಅರ್ಜಿ ಸಲ್ಲಿಸಲು ತಿಳಿಸಲಾಗಿದೆ. ಅರ್ಜಿಯ ನಮೂನೆಯನ್ನು ಜಿಲ್ಲಾ ಪರಿಶಿಷ್ಠ ವರ್ಗಗಳ ಕಲ್ಯಾಣ ಅಧಿಕಾರಿಗಳು ರಾಯಚೂರುರವರ ಕಛೇರಿಯ ವೇಳೆಯಲ್ಲಿ ಉಚಿತವಾಗಿ ಪಡೆಯಬಹುದು. ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳು ರಾಯಚೂರುರವರ ಕಛೇರಿಯನ್ನು ಸಂಪರ್ಕಿಸಿ ವಿವರಗಳನ್ನು ಪಡೆಯತಕ್ಕದ್ದು.

1) ಅರ್ಜಿದಾರರು ಪರಿಶಿಷ್ಠ ವರ್ಗದವರಾಗಿರಬೇಕು.

2) ಅರ್ಜಿಯ ಜೊತೆಗೆ ತಹಶೀಲ್ದಾರರಿಂದ ಪಡೆದ ಜಾತಿ ಪ್ರಮಾಣ ಪತ್ರ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

3) ಅರ್ಜಿಯ ಜೊತೆಗೆ ತಹಶೀಲ್ದಾರರಿಂದ ಪಡೆದ ಆದಾಯ ಪ್ರಮಾಣ ಪತ್ರ ದೃಢೀಕೃತ ಜೆರಾಕ್ಸ್ ಪ್ರತಿ ಲಗತ್ತಿಸಬೇಕು.

4) ಕಾನೂನು ತರಬೇತಿಯು ರಾಯಚೂರು ಜಿಲ್ಲೆಗೆ ಮಾತ್ರ ಸೀಮಿತವಾಗಿದ್ದು, ತರಬೇತಿಯನ್ನು ರಾಯಚೂರು ಜಿಲ್ಲೆಯಲ್ಲಿ ಕೊಡಲಾಗುವುದು.

5) ತರಬೇತಿ ಅವಧಿಯು ನಾಲ್ಕು ವರ್ಷವಿದ್ದು, ಈ ಅವಧಿಯಲ್ಲಿ ಪ್ರತಿ ತಿಂಗಳಿಗೆ ರೂ.1,000/–ರಂತೆ ಶಿಷ್ಯವೇತನ ಕೊಡಲಾಗುವುದು. ತರಬೇತಿಯನ್ನು ಮಧ್ಯದಲ್ಲಿ ಬಿಟ್ಟ ಪಕ್ಷದಲ್ಲಿ ಅಲ್ಲಿಯವರೆಗೆ ಪಾವತಿಸಿದ ಶಿಷ್ಯವೇತನವನ್ನು ಭೂ ಕಂದಾಯ ರೂಪದಲ್ಲಿ ಕಾನೂನಿನ ಪ್ರಕಾರ ವಸೂಲು ಮಾಡಿ ಸರ್ಕಾರಕ್ಕೆ ಕಟ್ಟಬೇಕಾಗಿರುತ್ತದೆ.

